# MUGULU

*(A BOOK OF POEMS IN KANNADA,*

FOR THE USE OF SCHOOLS

BY

**K. HONNAYYA SHETTY**

# ಮು ಗು ಳು

**ಕೆ. ಹೊನ್ನಯ್ಯ ಶೆಟ್ಟಿ**

SECOND EDITION

**1933**

PUBLISHERS—

**P. A. PAI. BROTHERS. UDIPI**



**0 2 6**

# ಮುನ್ನುಡಿ

**ಮುಗುಳಿದು** ಮುಗುಳಲ್ಲ; ಮುಗುಳುಗಳ ಮಾಲೆ. ಅರೆಮುಗುಳು ಗಳ ಮಾಲೆಯೆಂದರೂ ಸಲುವುದು. ಎಳೆಯ ಕನ್ನಡಗಬ್ಬಿಗನಿಂದ ಆಯು ಲ್ಪಟ್ಟು ಅವನುಡಿಯಲ್ಲಿಯೇ ಪವಣಿಸಿ ಬಂದ ಈ ಅರೆಬಿರಿದ ಮುಗುಳುಗಳ ಮಾಲೆಯೇ ಕನ್ನಡಿಗರೆಲ್ಲರಿಗೂ ಕಂಠಾಭರಣವಾಗಿ ಪರಿಣಮಿಸಲೆಂಬುದಿದೀಗ ನನ್ನ ಮುನ್ನುಡಿ.

ಎಳೆಯ ಕಬ್ಬಿಗನ ಮೊದಲ ಕಜ್ಜವಿದು. ಅವಿಕಲವೆಂದು ಹೇಳುವು ದಕ್ಕಿಲ್ಲ; ಪರಿಪಕ್ವವೆಂದು ತಿಳಿಯುವುದಕ್ಕೂ ಇಲ್ಲ. ಮುಗುಳಿದು ಅರೆ ಮುಗುಳು, ಬಿರಿದ ಹೂವಲ್ಲ. ಆದುದರಿಂದ ಅಷ್ಟೊಂದು ಪರಿಮಳದ ಬಹಿಃ ಪ್ರಸಾರವಿರದು. ಆದರೂ ಕೇವಲ ಕೋಮಲವಾದ ಅದರ ಸುವಾಸನೆಯ ಸೌಮ್ಯತೆ ಸೂಕ್ಷ್ಮವಾಗಿ ಹೊರಸೂಸದೆ ಇಲ್ಲವೆಂದರೆ ಅಡ್ಡಿಯಿರದು.

ಎಳೆಗಬ್ಬಿಗನ ಮೊದಲ ಕಜ್ಜವಾದರೂ, ಕಜ್ಜಾಯದಂತೆ ಗ್ರಹಣ ಯೋಗ್ಯವೇ. ಲೀಲಾಶುಕನ ಬಾಲಭಾಷಿತದ ಅದೊಂದು ಬಗೆಯ ಮಾಧುರ್ಯವನ್ನು ಯಾರಿನ್ನು ಗ್ರಹಿಸಲಿಕ್ಕಿಲ್ಲ? ಕ್ಷೀರನೀರನ್ಯಾಯವನ್ನು ಅನುಸರಿಸದಿರುವ ಅರಸಂಚೆಗಳಾದರೂ ಯಾರೀ ಪ್ರಪಂಚದಲ್ಲಿ? ಅಲಂಕಾರ ವಿಲ್ಲದೆ ಹೇಳುವುದಾದರೆ, ಛಂದೋವ್ಯಾಕರಣಗಳ ವಿಧಿನಿಷೇಧಗಳ ನಿಯಮೋ ಲ್ಲಂಘನದಿಂದ ಶುದ್ಧ ಪಂಡಿತರ ಸಮಾದರಕ್ಕೆ ಪಾತ್ರವಾಗಲಾರದೆ ಹೋದರೂ, ಪ್ರತಿಪಾದಿತವಾದ ವಿಷಯಗಳ ಮತ್ತೂ ರಸಭಾವಗಳ ನವೀನಸಮ್ಮೇಲನದಿಂದ ನವೀನ ಕವಿಯ ಕೃತಿಯಿದು ಸಾಮಾನ್ಯವಾಗಿ ಎಲ್ಲರ ಮನಸ್ಸನ್ನೂ ರಂಜಿಸದೆ ಇರಲಾರದು. ಮುಖ್ಯವಾಗಿ ಮೂಲಶಾಲೆಗಳ ಎಳಮಕ್ಕಳ ಪದ್ಯಪಾಠಕ್ಕೆ ಕೇವಲ ಉಪಯುಕ್ತವಾದ ಈ ಉದ್ಯಮದಿಂದ ಉದ್ದೇಶವು ಸ್ವಲ್ಪವಾದರೂ ಸಿದ್ಧವಾಗುವುದಾದಲ್ಲಿ, ನಮ್ಮ ಈ ಎಳಗಬ್ಬಿಗನ ಶ್ರಮವು ಸಾರ್ಥಕವಾದಂತಾ ಗುವುದರಲ್ಲಿ ಸಂದೇಹವಿಲ್ಲ.

"ಶ್ರೀವಿಲಾಸ," ಕಡೇಕಾರು,
ಉಡುಪಿ,
16ನೆಯ ಜುಲೈ 1929.

**ಎನ್. ರಾಜಗೋಪಾಲಕೃಷ್ಣರಾಯ,**
ಭೂತಪೂರ್ವ "ಶ್ರೀಕೃಷ್ಣಸೂಕ್ತಿ" ಸಂಪಾದಕ
ಮತ್ತೂ ವೃತ್ತಲೇಖಕ.



॥ गुरुदेवो भव ॥

# ಅರ್ಪಣಾಪತ್ರ



**ನನ್ನ**

ಪರಮ ಪೂಜ್ಯ ಗುರುಗಳೂ,

ಮಂಗಳೂರು ಗವರ್ನಮೆಂಟ್ ಹಾಯರ್ ಎಲಿಮೆಂಟರಿ ಟ್ರೈನಿಂಗ್ ಶಾಲಾ

ಪ್ರಧಾನಾಧ್ಯಾಪಕರೂ

ಆಗಿದ್ದ

**ಶ್ರೀಮಾನ್ ಉಳ್ಳಾಲ ಮಂಗೇಶರಾವ್,**

ಬಿ. ಎ., ಎಲ್. ಟಿ. ಯವರ

**ಅಡಿದಾವರೆಗಳಲ್ಲಿ**

ಇವರಲ್ಲಿರುವ ಶಿಷ್ಯವಾತ್ಸಲ್ಯ, ಸತ್ಯಪ್ರಿಯತೆ, ಪರಿಶುದ್ಧಾತ್ಮ, ಪರೋಪಕಾರ, ಸರಳಹೃದಯ, ಸಾಹಿತ್ಯಪ್ರೇಮ ಇವೇ ಮೊದಲಾದ ಸದ್ಗುಣಗಳ ಸಮೂಹಕ್ಕಾಗಿ

**ಗುರುಭಕ್ತಿಯಿಂದ**

ಈ ಚಿಕ್ಕ **ಮುಗುಳನ್ನು** ವಂದನಾಪೂರ್ವಕವಾಗಿ

**ಸಮರ್ಪಿಸಿರುವೆನು.**

ಕಟಪಾಡಿ ಹೊನ್ನಯ್ಯ ಶೆಟ್ಟಿ.

# ಅನುಕ್ರಮಣಿಕೆ

## ರವಿಯೆ ಬಾರೊ!

ರವಿಯೆ! ಬಾರೊ! ಬುವಿಗೆ ಬಾರೊ! - ಪ -
ಮೂಡಿ ಬಾರೊ! ಓಡಿ ಬಾರೊ!
ಮೂಡ ಕಾಡ, ಏರಿ ಬಾರೊ!
ಮೂಡ ಬೆಟ್ಟ, ಹತ್ತಿ ಬಾರೊ!
ನಾಡಿಗಂದವೀಯು ಬಾರೊ! ೧

ಬೆಳಕ ತಾರೊ! ಬೆಳಗಿ ಬಾರೊ!
ಇಳೆಯು ಕಣ್ಣೆ! ಬೇಗ ಬಾರೊ!
ಕತ್ತಲನ್ನು ಕಳೆಯು ಬಾರೊ!
ಸುತ್ತಮುತ್ತ ಬೆಳಗ ಬಾರೊ! ೨

ಮುಗುಳು ಕಮಲ, ಬಿರಿಯು ಬಾರೊ!
ಜಗದ ಎವೆಯು, ತೆರೆಯು ಬಾರೊ!
ಒಲಿದು ಬಾರೊ! ನಲಿದು ಬಾರೊ!
ಹೊಳೆದು ಬಾರೊ! ಒಲಿದು ಬಾರೊ! ೩

### ಪಕ್ಕಗಳಿದ್ದರೆ—

ಹಕ್ಕಿಯು ತೆರದಲಿ ಪಕ್ಕಗಳಿದ್ದರೆ—
ಗಕ್ಕನೆ ಗಗನಕೆ ಹಾರುತಲಿರ್ದೆ.
ಏರಿಗೆ ಹಾರುತ, ಬಾನನು ಸೇರಿ,
ತೋರುತ ಲೀಲೆಯ ನಾ ಬರುತಿರ್ದೆ. ೧
ಹಕ್ಕಿಯು ತೆರದಲಿ ಪಕ್ಕಗಳಿದ್ದರೆ—
ಮೂಡಣ ಬೆಟ್ಟವ ಗಟ್ಟವ ಸಾಗಿ,
ಮೂಡುವ ರವಿಯನು ನಾ ತರುತಿರ್ದೆ.
ಓಡುವ ಗಾಳಿಯ ಹಿಡಿಯುತಲಿರ್ದೆ. ೨
ಹಕ್ಕಿಯು ತೆರದಲಿ ಪಕ್ಕಗಳಿದ್ದರೆ—
ಚೆಲುವಿನ ಚಂದ್ರನ, ಮೇಲಿನ ಇಂದ್ರನ,
ತಳತಳ ಮಿನುಗುವ ಹೊಳೆ ಹೊಳೆ ಹೊಳೆಯುವ
ತಾರೆಗಳೆಲ್ಲವ ನಾ ತರುತಿರ್ದೆ. ೩

---

### ಹಾರುವ ಹಕ್ಕಿ.

ಸೊಬಗಿನ ಹಕ್ಕಿಯೆ! ಸೊಗಸಿನ ಚುಕ್ಕಿಯೆ!
ಹಾರುವ ಹಕ್ಕಿಯೆ! ಬಾರೆಲೆ ಹಕ್ಕಿಯೆ!
ಪುಕ್ಕದ ಹಕ್ಕಿಯೆ! ಬಣ್ಣದ ಹಕ್ಕಿಯೆ!
ಆಡಲು ಬಾರೈ! ಹಾಡಲು ಬಾರೈ! ೧
ಸೊಬಗಿನ ಹಕ್ಕಿಯೆ! ಸೊಗಸಿನ ಚುಕ್ಕಿಯೆ!
ಆಡುವರಿಲ್ಲವು, ಹಾಡುವರಿಲ್ಲವು.
ಆಡುವ ಬಾರೈ ಹಾಡುವ ಬಾರೈ!
ಆಡುತ ಹಾಡುತ ನಲಿಯುವ ಬಾರೈ! ೨

ಸೊಬಗಿನ ಹಕ್ಕಿಯೆ! ಸೊಗಸಿನ ಹಕ್ಕಿಯೆ!
ಅಮ್ಮನು ಕೊಟ್ಟಿಹ ಚಕ್ಕುಲಿ ಉಂಟು;
ಅಕ್ಕನು ಕೊಟ್ಟಿಹ ಸಕ್ಕರೆ ಉಂಟು;
ಇಬ್ಬರು ಸೇರುತ ಸವಿಯುವ ಬಾರೈ! ೩

ಸೊಬಗಿನ ಹಕ್ಕಿಯೆ! ಸೊಗಸಿನ ಚುಕ್ಕಿಯೆ!
ಮೇಲಕೆ ಹಾರಲು ಕಲಿಸೆಯ ನನಗೆ?
ಹಾಲನು ಕೊಡುವೆನು, ಈಗಲೆ ನಿನಗೆ.
ಹಾರುವ ಹಕ್ಕಿಯೆ! ಬಾರೆಲೆ ಹಕ್ಕಿಯೆ! ೪

---

### ಹಸಿದವರಿಗೆ ಇಲ್ಲ!

ವರುಷ ಒಂದು ಸಂದಿತು;
ಹೊಸತು ಹಬ್ಬ ಬಂದಿತು;
ತಿನಲು ಉಣಲು ಸಿಕ್ಕಿತು;
ಕುಣಿಯಲೆಮಗೆ ಆಯಿತು. ೧

ಕುರುಡಿ ಸುಬ್ಬಿ ಬಂದಳು;
ಬೇಡಿ ಕಾಡಿ ನಿಂದಳು;
ಅಮ್ಮ—'ಹೋಗು' ಎಂದಳು;
'ಇಲ್ಲ ಏನು'—ಅಂದಳು. ೨

ಕುರುಡಿ ಸುಬ್ಬಿ ನಡೆಯುತ;
ಹೋದಳಾಗ ಮರುಗುತ;
ನೆರೆಯ ಪುಟ್ಟ ಓಡುತ;
ಮನೆಗೆ ಬಂದನಾಡುತ. ೩

ಅಮ್ಮ ಕರೆದಳವನನು;
ಕೊಟ್ಟಳವಗೆ ತಿನಸನು;
ಹಸಿದ ಜನಕೆ ಇಲ್ಲವೆ?
ಅವರಿಗೇನು ಸಲ್ಲವೆ? ೪

**ಹಸಿದ ಜನಕೆ ಉಣಿಸುವ!**
**ಅವರ ಹೊಟ್ಟೆ ತಣಿಸುವ!**
**ಹಸಿದ ಜನಕೆ ತಿನಿಸುವ!**
**ಅವರನೇಕೆ ದಣಿಸುವ?** ೫

---

## ಬಾರೆ! ಹೋಗುವ ಸಾಗುವ!

ನಮ್ಮ ಊರಿನ ಜಾತ್ರೆ ಈ ದಿನ,
ಬಾರೆ! ಹೋಗುವ ಸಾಗುವ!
ಅಮ್ಮ ಬರುವಳು, ಅಕ್ಕ ಬರುವಳು,
ಬಾರೆ! ಹೋಗುವ ಸಾಗುವ! ೧
ಅಪ್ಪ ಬರುವನು, ಅಣ್ಣ ಬರುವನು,
ಬಾರೆ! ಹೋಗುವ ಸಾಗುವ!
ತಮ್ಮ ಬರುವನು, ತಂಗಿ ಬರುವಳು,
ಬಾರೆ! ಹೋಗುವ ಸಾಗುವ! ೨
ಮಾವ ಬರುವನು, ಬಾವ ಬರುವನು,
ಬಾರೆ! ಹೋಗುವ ಸಾಗುವ!
ದುಡ್ಡು ಕೊಡುವರು, ಲಡ್ಡು ಕೊಡುವರು,
ಬಾರೆ! ಹೋಗುವ ಸಾಗುವ! ೩

---

## ರಂಗನೂ ಪತಂಗವೂ.

**ರಂಗ**—ಬಾರೆಲೆ! ಬಾರೆಲೆ! ಸುಪತಂಗ,
ಹಾರುತ ದಣಿಯದೆ ನಿನ್ನಂಗ,
ತಾರೆಯ ತೆರದಲಿ ಬಾನಿನಲಿ,
ತೋರುವಿ ಮಿನುಗುತ ದೂರದಲಿ. ೧

ಹಿತ್ತಲಿಗೇತಕೆ ಹಾರುವೆಯು?
ಹತ್ತಿರ ಬಾರದೆ ತೊರೆಯುವೆಯು?
ಕತ್ತಿನ ಹಾರವ ನಿನಗೀವೆ;
ಎತ್ತಲು ಆಡುವ ಬಾ ನಾವೆ. ೨

**ಪತಂಗ**—ಬಾರೆನು ಬಾರೆನು ನಾ ಬಳಿಗೆ,
ಸೇರೆನು ನಿನ್ನನು ಅರೆಗಳಿಗೆ.
ಸಾರುವೆನೆನ್ನಯ ನೆಲೆಮನೆಗೆ,
ಸೇರೆನು ಬಾಲನೆ ನಾ ನಿನಗೆ. ೩

ಕತ್ತಿನ ಹಾರವೆ ಕತ್ತರಿಯು,
ಕತ್ತನು ಹಿಸುಕುವ ಹತ್ತರಿಯು.
ಎತ್ತಲು ಆಡುವ ಆಟವದು,
ಮತ್ತೆನ ಕೊಲ್ಲುವ ಮಾಟವದು. ೪

**ರಂಗ**—ನಿಲ್ಲೆಲೆ! ನಿಲ್ಲೆಲೆ! ನೀನೀಗ,
ಸೊಲ್ಲನು ಪೇಳುವೆ ನಾನೀಗ.
ಇಲ್ಲಿಗೆ ಮೆಲ್ಲನೆ ಬಾ ನೀನು;
ನಿಲ್ಲದೆ ಬೆಳೆಸುವ ನೇಹವನು. ೫

ಕಟ್ಟುವೆ ನಿನ್ನನು ನೂಲಿನಲಿ,
ಹೊಟ್ಟೆಯ ತಣಿಪೆನು ಹಾಲಿನಲಿ.
ಪಟ್ಟೆಯ ಬಟ್ಟೆಯನುಡಿಸುವೆನು,
ಗಟ್ಟಿದ ಮೆಟ್ಟಂ ನಡಿಸುವೆನು. ೬

**ಪತಂಗ**—ನಿನ್ನಯ ಸುಖಗಳ ನಾನೊಲ್ಲೆ,
ನಿನ್ನಯ ಸನಿಹಕೆ ಬರಲೊಲ್ಲೆ.
ಮನ್ನಿಸಬೇಕೈ ಸರ್ವರನು;
ಬನ್ನವ ಗೊಳಿಪುದು ಸರಿಯೇನು? ೭

ಹೂವಿಂ ಹೂವಿಗೆ ಹಾರುತಲಿ,
ಸೇವಿಪೆ ಮಧುವನು ಹೀರುತಲಿ.
ದೇವನ ಸ್ಮರಣೆಯ ಮಾಡುತ್ತ,
ಕಾವನ ಹಾಡನು ಹಾಡುತ್ತ. ೮

ಗುರುಗಳ ವಚನವ ಕೇಳುತ್ತ,
ಸರಿ ಪಾಠವ ನೀ ಕಲಿಯುತ್ತ;
ಇರುತಿರೆ ಈಶನ ನಾಮವನು,
ಸ್ಮರಿಸುತ ಪಡೆಯುವೆ ಸೌಖ್ಯವನು. ೯

**ರಂಗ**—ಮುದ್ದು ಪತಂಗವೆ! ನಿನ್ನಿಂದ
ಬುದ್ಧಿಯ ಕಲಿತೆನು, ನಾನಂದ.
ಮುದ್ದಿನ ಗಿಣಿ! ನಿನಗೊಂದನೆಯು;
ಮುದ್ದಿಪ ಗುರುಗಳಿಗೊಂದನೆಯು. ೧೦

---

## ಕರುವಿನ ಮೊರೆ.

ಹುಟ್ಟಿ ಬಂದೆನು; ಪೆಟ್ಟು ತಿಂದೆನು,
ಕೆಟ್ಟ ಜನರಲಿ ನೊಂದೆನು.
ಬಟ್ಟೆವರಿಯೆನು, ಕಟ್ಟಿ ಕೊರಳನು,
ಕೊಟ್ಟರೆನಗೈ ಸೆರೆಯನು. ೧

ಸಾರಿ ಮೊಲೆಯನು ಹೀರೆ ಹಾಲನು
ಹಾರಿ ಕೊಟ್ಟರು ತಡೆಯನು

ದೂರ ಪೋಯ್ದರು, ಸಾರಿ ಬೈದರು;
ಸೇರಗೊಡರೆನ ತಾಯನು. ೨

ಹೊಡೆದರೆನ್ನನು, ಬಡಿದು ಬೆನ್ನನು,
ಕಡೆಗೆ ಕಂಬಕೆ ಬಿಗಿದರು.
ತಡೆಯಲಾರದೆ, ನಡೆಯಲಾರದೆ,
ಒಡನೆ ಕರೆದೆನು ತಾಯನು. ೩

ಆಗ ಬಂದಳು, ಸಾಗಿ ತಂದಳು,
ನಾಗು ತಂಬಿಗೆಯೊಂದನು.
ಬೇಗ ಬಿಟ್ಟಳು, ಹೋಗಕೊಟ್ಟಳು,
ಹೇಗೆ ಹುಟ್ಟಿತೊ ಕರುಣೆಯು! ೪

ಹರುಷಗೊಂಡೆನು, ಸರಿದು ಕಂಡೆನು,
ಕರೆವ ತಾಯಿಯ ಮುಖವನು.
ಸುರಿಯ ಬಿಟ್ಟಳು, ಹರುಷಪಟ್ಟಳು,
ತ್ವರದೆ ಕೊಟ್ಟಳು ಹಾಲನು. ೫

ಅಕ್ಕರಿಂದಲಿ, ಚೊಕ್ಕದಿಂದಲಿ,
ನೆಕ್ಕುತಿರಲೆನ ಬೆನ್ನನು;
ರಕ್ಕಸಿಯ ತೆರ ನಾಗು ಮೊಕ್ಕಳು,
ಸೊಕ್ಕಿ ಬಿಗಿದಳು ನನ್ನನು. ೬

ನೋಡಲಾರದೆ, ಬೇಡಲಾರದೆ,
ಕಾಡಲಾರದೆ ತಾಯಿಯು.
ಗಾಢ ಗತಿಯಲಿ, ಮೂಢ ಮತಿಯಲಿ,
ಆಡಿಸಿದಳಾ ಕಾಲನು. ೭

ಶಿರಕೆ ತಾಗಿತು, ಗರುವವೇರಿತು,
ಕರದ ಪಾತ್ರೆಯು ಬಿದ್ದಿತು.
ಕೊರಡ ಹಿಡಿದಳು, ಭರದಿ ಬಡಿದಳು,
ಕರುಣೆಯುಡಗಿತು ತಗ್ಗಿತು. ೮

ಕುಡಿಯುಗೊಡರೈ, ಸಡೆಯುಗೊಡರೈ,
ಪಡೆಯು ಬಿಡರೈ ಹಾಲನು.
ಪಿಡಿದು ಕಟ್ಟುತ, ಹೊಡೆದು ಮೆಟ್ಟುತ,
ಕುಡಿದು ಜನರೇ ಬಿಡುವರು. ೯

ಯಾವ ನೀತಿಯೊ? ಯಾವ ರೀತಿಯೊ?
ಯಾವ ನ್ಯಾಯವೊ ದೇವನೆ!
ಮೇವು ಇಲ್ಲವು ಕಾವರಿಲ್ಲವು,
ಕಾಯು ನೀನೇ ದೇವನೆ! ೧೦

---

## ವಿನಯವೇ ಜಯವು.

ಉಕ್ಕಿನಾ ಸರಳೊಂದು ಬಲಶಾಲಿಯೆಂದು,
ಸೊಕ್ಕಿ ಮಾತಾಡುವುದ ಖಂಡಿಸುವೆನೆಂದು;
ಉಕ್ಕಿನಾ ಮೊನೆಯಾದ ಕೊಡಲಿ ತಾನೊಂದು,
ಲೆಕ್ಕಿಸದೆ ಕಡಿಯ ತೊಡಗಿತು ಬಳಿಗೆ ಬಂದು. ೧

ಕಡಿಕಡಿದು ಕೊಡಲಿ ತಾನತಿ ಬಳಲಿ ನೊಂದು,
ಕಡೆಗೆ ಕಿಡಿಕಿಡಿಯಾಗಿ ಕಡಿಯೆ 'ಹಾಯೆ'ಂದು.
ಪುಡಿಪುಡಿಯದಾಯಿತ್ತೈ ಬಲು ಕೂಗುತಂದು,
ನಡುಗಿತ್ತೈ ಗಡಗಡನೆ ಗತಿಯೇನು ಎಂದು. ೨

ಬಂದೊಂದು ಗರಗಸವು ತಾ ನೋಡ್ವೆನೆಂದು,
ಚಂದದಿಂ ಪಲ್ಕಿರಿದು ಸನಿಹಕ್ಕೆ ಬಂದು;
ಮುಂದನರಿಯದೆ ಸರಳ ಸಿಗಿಯಲ್ಕೆ ನಿಂದು;
ಮುಂದುಳಿಯದಂತಾದುವೈ ಪಲ್ಗಳೆಂದು. ೩

ಸಾಗ ಬಡಿಯುವೆನೆಂದು ಸುತ್ತಿಗೆಯದೊಂದು,
ಪೋಗಿರೆಂದೆಲ್ಲರನು ಕಳುಹಿ ತಾ ನಿಂದು.
ಬಾಗಿ ಪೊಡೆಯಲು ಅದರ ಶಿರ ಹಾರಿತೆಂದು,
ಆಗ ಚೀರಿದುದನೇನೆಂಬೆ ಬಿಟ್ಟೋಡಿ ಬಂದು. ೪

ಬಳಿಕೊಂದು ಪುಟ್ಟ ದೀಪವು ಜಯಿಸಲೆಂದು,
ಬಳಿ ಸಾಗಿ ಶಿರ ಬಾಗಿ ವಿನಯದಲಿ ನಿಂದು;
ಒಲಿದು ಸವಿ ನುಡಿಯಾಡಿ ನಿಮಿಷದಲಿ ಮುಂದು,
ಬಲವಾಗಿ ಉರಿದು ಸರಳನು ಗೆದ್ದಿತಂದು. ೫

ವಿನಯವೇ ಕೆಲಸವನು ಕೊನೆಗೊಳಿಪ ಬಂಧು,
ವಿನಯವೇ ವಿದ್ಯೆಯೈ! ವಿನಯವೇ ಬುದ್ಧಿ!
ವಿನಯದಲಿ ಲೋಕವನು ಜಯಿಸಬಹುದೆಂದ,
ವಿನಯವೆಂಬುದೆ ಚಂದವದ ಕಲಿಯೊ ಕಂದ! ೬

---

## ಚಲಚ್ಚಿತ್ರ (ಸಿನೆಮಾ).

ಬೆರಗುಗೊಳಿಪುದು, ಹರುಷಗೊಳಿಪುದು,
ಅರಿವು ಬರುವುದು ಸಿನೆಮದಿ.
ಸರುವ ಕಥೆಯನು, ತೋರಿ ವ್ಯಥೆಯನು,
ಒರಸಿ ಬಿಡುವುದು ನಿಮಿಷದಿ. ೧

ಎಲೆಲೆ! ಮಾನವ! ಒಲಿದು ಜ್ಞಾನವ,
ಕಲಿಪುದಲ್ಲವೆ ಸರ್ವವ?
ಬೆಲೆಯ ಕೊಟ್ಟರು, ಸಮಯ ಕೆಟ್ಟರು,
ಚೆಲುವ ನೋಡಲು ಹೋಗುವ. ೨

ಕಳ್ಳ ಕಾಣುವ, ಸುಳ್ಳ ಹೇಳುವ,
ಕನ್ನ ಹಾಕುವ ದಾರಿಯಾ
ಹಳ್ಳಿ ಜನರಿಗೆ ನೋಡಲಿಲ್ಲವು,
ಎಲ್ಲ ಸುಖಗಳು ಪೇಟೆಯಾ. ೩

ಅರಸ ಬರುವನು, ಅರಸಿ ಬರುವಳು,
ಹರುಷಗೊಳಿಪರು ಜನರನು.
ಸುರಸನರ್ತನ, ಸುರಸವರ್ತನ—
ವಿರಿಸಿ ಅಭಿನಯ ಸಾರ್ವರು. ೪

ಏನು ಚೋದ್ಯವು! ಏನು ಮಾನ್ಯವು!
ಏನು ಸಾಹಸ ನೋಡಲು.
ಏನು ಪ್ರೀತಿಯು, ಏನು ಭ್ರಾಂತಿಯು,
ಏನು ಭಕ್ತಿಯು ನುಡಿಯಲು. ೫

ಸತಿಯ ಮರ್ಮವ, ಪತಿಯ ಕರ್ಮವ,
ಸುತನ ಧರ್ಮವ ಸಾರುತ;
ಕಥೆಯು ಸಾಗ್ವದು, ಮತಿಯು ಅರಳ್ವದು,
ಅತುಳ ವೈಭವ ನೋಡುತ. ೬

ದುಷ್ಟ ಜನರಿಗು, ಶಿಷ್ಟ ಜನರಿಗು,
ಸೃಷ್ಟಿಸುತ್ತಲೆ ಬುದ್ಧಿಯಾ.
ನಷ್ಟವಿಲ್ಲದೆ, ಕಷ್ಟವಿಲ್ಲದೆ,
ಸ್ಪಷ್ಟವೆಲ್ಲವ ತೋರ್ಪುದು. ೭

ಕಟ್ಟು ಕಥೆಗಳ, ಹುಟ್ಟಿಸುತ್ತಲೆ,
ಅಟ್ಟಹಾಸದಿ ಮೆರೆವುದು.
ಇಟ್ಟು ಮನವನು, ಕೊಟ್ಟು ಧನವನು,
ಕಟ್ಟದೊಂದನು ನುಡಿಯುದು. ೮

---

## ನೀತಿಮಾರ್ಗ.

ಮಗುವೆ! ಕೆಲಸ ಮಾಡು ಜಗದಿ ನಾಳೆಗೆ ಎಂದು,
ಬಗೆಯದಿರು ಅತಿಸುಲಭವಹುದು ನಿನಗೆ.
ಹಗೆಯ ತಾಳಲು ಬೇಡ, ಹೆಗಲಿಗೆ ಹೆಗಲನಿತ್ತು,
ಸೊಗದಿಂದ ಐಕ್ಯದಿರು ಸರ್ವರಲಿ ಸುಖದಿ. ೧

ಸ್ಮರಿಸು ದೇವರ ದಿನವು, ಇರಿಸು ಗುರುವೊಳು ಭಕ್ತಿ,
ನಿರತ ಧರ್ಮವ ಮಾಡು ಕೆಡಬೇಡ ನೀ.
ಸರಳ ಹೃದಯವೆ ಲೇಸು, ಪರರ ಸೇವೆಗೆ ಹೇಸು,
ಕರುಣೆಯನು ದೀನರಲ್ಲಿಡೆ ಮರೆವುದೆ? ೨

ರೀತಿಯನು ತಿಳಿ ಜನರ, ನೀತಿಯನು ಕಲಿ ಜಗದ,
ಜಾತಿಭೇದವನೆಣಿಸಬೇಡ, ಮಗುವೆ!
ಮಾತು ನೀ ಸವಿಯಾಡು. ಮಾತಿಗೊಲಿಯಲು ಬೇಡ,
ಘಾತಿಸುವ ಮನ ಬೇಡ, ಘನತೆಯಲ್ಲ. ೩

ಸತ್ಯ ವಚನವನಾಡು, ಮಿಥ್ಯ ನುಡಿಗಳ ಕಳೆಯು,
ಸುತ್ತುತಿಹ ಚಿತ್ತವನು ಸ್ಥಿರವಾಗಿಸು.
ಉತ್ತಮ ನಡತೆಯಲಿರು, ಹೊತ್ತ ಕೆಲಸವ ಮುಗಿಸು,
ಮತ್ತದನು ಅರ್ಧದಲಿ ಬಿಡೆ ಸಲ್ಲದು. ೪

ಆಳೆನಿಸಿ ದುಡಿದುಣ್ಣು ಆಳುವರಸನ ತೆರದಿ,
ತಾಳು ಶಾಂತಿಯ ಮನದಿ, ಬಾಳು ಸುಖದಿ,
ನಾಲಗೆಯ ಕೆಡಿಸದಿರು, ಸಾಲವನು ಮಾಡದಿರು,
ಬಾಲ ನೀ ನುಡಿಗೇಳು ಲೀಲೆಯಿಂದ. ೫

ಕಲಿಯೊ ವಿದ್ಯೆಯ ಸಿರಿಯ, ಕುಲವ ಬೆಳಗಿಪ ರವಿಯ,
ಬೆಳೆಸು ನಿನ್ನಲಿ ಧರ್ಮನಿಧಿಯನ್ನೆಲೆ!
ಸಿಲುಕದಿರು ಕೆಡುಕರಲಿ, ಬಳಸಿ ಬಹ ಆಪತ್ತು,—
ಗಳಿಗೆ ನೀನಳುಕದಿರು ಮರುಗಬೇಡೈ. ೬

ಹುಟ್ಟದೀ ಮಾತೆಯಲ್ಲಿಟ್ಟು ಪ್ರೇಮವನನುದಿನ,
ಕೊಟ್ಟು ತನು ಮನ ಧನವ ಸೇವೆಮಾಡು.
ಕಟ್ಟಳೆಯ ಮೀರದಿರು, ಸೃಷ್ಟಿಗೊಡೆಯನನೊಲಿಸು,
ಕಷ್ಟ ನಷ್ಟವನೆಣಿಸದಿರು ನೀತಿಯಿಂ. ೭

---

## ಗೋರಕನಾಥನ ಗುರುಭಕ್ತಿ.

ನಡೆದು ಬಳಲುತ, ಪಸಿವು ತಾಳುತ,
ಅಡವಿ ಮಧ್ಯದಿ ತಂಗುತ;
'ನಡೆಯಲಾಗದು, ನುಡಿಯಲಾಗದು,
ತಡೆಯಲಾರೆನು ಪಸಿವನು;' ೧

‘ಸಾಗು ಈಗಲೆ! ಶಿಷ್ಯ ಪೋಗೆಲೆ!
ಪೋಗಿ ತಾರೆಲೆ ಭಿಕ್ಷೆಯಾ’
ಹೀಗೆ ನುಡಿಯಲು ಗುರುಮಚ್ಛೇಂದ್ರನು,
ಬಾಗಿ ಮಣಿಯುತ ಗೋರಕ— ೨

ಹಿಡಿದು ಬಂದನು, ಪಾತ್ರೆಯೊಂದನು,
ಬಿಡದೆ ಸೇರಿದ ಪುರವನು.
‘ಕೊಡಿರಿ ಭಿಕ್ಷೆಯ, ಪಡಿರಿ ಅಕ್ಷಯ
ಪೊಡವಿಯಲಿ ಸತ್ಕೀರ್ತಿಯಾ.’ ೩

ಎಂದು ಮುಂದಿನ ಸದನದೆದುರಲಿ,
ನಿಂದು ಬೇಡಲು ಒಡತಿಯು,
ಬಂದು ಬಿಟ್ಟಳು ತಂದು ಕೊಟ್ಟಳು,
ಅಂದೆ ಮಾಡಿದ ಹೋಳಿಗೆ. ೪

ನಂದಗೊಂಡನು, ಬಂದು ಕಂಡನು,
ವಂದಿಸುತ್ತಲೆ ಗುರುವನು,
ಮುಂದಕಿಟ್ಟನು ತಂದ ಭಿಕ್ಷೆಯ,
ತಿಂದು ತೇಗಿದನಾ ಗುರು. ೫

ಮುಂದೆ ಹೇಳಿದ—‘ಕಂದ ನಾಳಿದ—
ನಿಂದಿನಂತೆಯೆ ಬೇಡುತ,
ತಂದು ನೀ ಕೊಡು ರುಚಿಗೆ ಸೋತೆನು’
ಎಂದಡೊಪ್ಪಿದ ಶಿಷ್ಯನು. ೬

ದಿನವು ಅಂದಿನ ಕಳೆದು ಮುಂದಿನ
ದಿನವು ಬರಲಾ ಗೋರಕ—
ಮನೆಗೆ ಬಂದನು, ‘ಕೊಡಿರಿ’ ಎಂದನು,
ಮನೆಯ ಮಾನಿನಿ ಧಾನ್ಯವ. ೭

ತರಲು ನುಡಿದನು—‘ಅಮ್ಮ ಬೇಡಿದು,
ಕರುಣದಲಿ ಕೊಡಿ ಹೋಳಿಗೆ’.
‘ಪರಮ ಶ್ರೇಷ್ಠರೆ! ಮುಗಿದು ಹೋಯಿತು,
ಇರದು ಹೋಳಿಗೆ’ ಎಂದಳು. ೮

ಕೇಳಲಾರನು, ಏಳಲಾರನು,
ತಾಳಿ ಕೋಪವ ಹೆಂಗುಸು,
‘ಕೀಳು ಬೇಗನೆ ಕೊಡುವೆ ಹೋಳಿಗೆ’
ಹೇಳಿದಾಗಲೆ ಕಣ್ಣನು. ೯

ಕಿತ್ತು ಬಿಟ್ಟನು, ಅದನು ಕೊಟ್ಟನು,
ಒತ್ತಿ ಸುರಿಯಿತು ರಕ್ತವು.
ಮತ್ತೆ ಹೆಂಗುಸು ಭಯದಿ ಹೋಳಿಗೆ
ಇತ್ತಳಾಗಲೆ ಒದಗಿಸಿ. ೧೦

ಕೊಡಲು ಗುರುವಿಗೆ ತಂದ ಭಿಕ್ಷೆಯು,
ಒಡನೆ ಭಕ್ಷಿಸಿ, ನೋಡಿದ,
ಬಿಡದೆ ಸುರಿಯುವ ರಕ್ತ ಕಣ್ಣಿನ,
ನಡೆದುದೆಲ್ಲವ ಕೇಳಿದ. ೧೧

‘ಎಲೆಲೆ ಶಿಷ್ಯನೆ! ನಿನಗೆ ಎನ್ನಲಿ,
ನೆಲಸಿ ಇದ್ದರೆ ಪ್ರೀತಿಯು;
ತಳುವದೀಗಲೆ ಉಳಿದ ಕಣ್ಣನು,
ಸುಲಿದುಕೊಡು ನೀ’—ಎಂದನು. ೧೨

ಅಳುಕಲಿಲ್ಲವು, ತುಳುಕಲಿಲ್ಲವು,
ತಳೆದು ಧೈರ್ಯವ ಶಿಷ್ಯನು,
ಉಳಿದ ಕಣ್ಣನು, ಕಳಚಿ ಕೊಟ್ಟನು,
ಬಳಿಯಲಿಟ್ಟನು ಶ್ರೇಷ್ಠನು. ೧೩

ಏನು ಪ್ರೀತಿಯು! ಏನು ಭಕ್ತಿಯು!
ಏನನೆಂಬೆನು ಧೈರ್ಯವ!
ದಾನಶೀಲರೆ! ದೀನ ಬಾಲರೆ!
ಸಾನುರಾಗದಿ ಕೇಳಿರಿ! ೧೪

ಗುರುವು ಶಿಷ್ಯನ, ಪರಮ ಭಕ್ತಿಗೆ,
ತ್ವರದೆ ಮೆಚ್ಚಿದ ಅಪ್ಪಿದ
ಕರವನಾಡಿಸಿ, ಎರಡು ಕಂಗಳ
ಸರಿಯುಗೊಳಿಸಿದ ಕ್ಷಿಪ್ರದಿ ೧೫

---

## ಬೆಳಕು ಗೂಡು.

ಗಗನವನು ಚುಂಬಿಸುವ ಗೋಪುರದ ತುದಿಯಲ್ಲಿ,
'ಜಗಜಗ'ನೆ ಬೆಳಕೊಂದು ಶೋಭಿಸುವುದು.
ದಿಗಿಲುಗೊಳಿಪುದು ಮಿಂಚುವಾ ಮಿಂಚಿನಂತಲ್ಲಿ
ಜಗವನೆಲ್ಲವನೊಮ್ಮೆ ಬೆಳಗುತ್ತಲಿಹುದು. ೧

ಏರುತೇರುತ ಶಿಖರ ಕಿರಿದು ಕಿರಿದಾಗುವುದು;
ಏರುವರೆ ತುದಿಗಾಗಿ ಇರುವುದೈ ಏಣಿ.
ಸಾರೆ ದಿನಪನು ಸಂಜೆಯಲಿ ಬೆಳಕ ಹೂಡುವರು;
ಸಾರ್ವುದಾಗಲೆ ಬೆಳಕು ಭೂತಗನ್ನಡಿಯಿಂ. ೨

ಸಿಡಿಲು ಬಡಿಯದ ತೆರದಿ, ಸರಿಗೆಯನು ತುದಿಯಿಂದ
ಪೊಡವಿಗಿಳಿಸಿರುವರೈ, ನೋಡಲಾನಂದ.
ನಡುನಡುವೆ ಇಹ ಟೊಳ್ಳಿನಾ ಅಂತಸ್ತುಗಳಲಿ,
ಇಡುವರೈ ಸಂಗ್ರಹಿಸಿ ಬೇಕೆನಿಪ ವಸ್ತು. ೩

ದಾರಿಗಾಣದೆ ಕಂಗೆಡುವರಿಗೆ ಸುಪಥವನು,
ತೋರಿಪುದೆ ಘನತರದ ಸುಕೃತವಹುದು.
ಧಾರುಣಿಯಲೀ ದೀಪಗೃಹವು ಪಥವನ್ನು ತಾ
ಬಾರಿಬಾರಿಗು ತೋರಿಪುದು ಬೆಳಕನಿತ್ತು. ೪

ತನ್ನಯಾ ಸ್ವಾರ್ಥವನು ತ್ಯಜಿಸಿ ದೀಪಾಲಯವು,
ಅನ್ಯರಿಗೆ ಉಪಕಾರವೆಸಗುವುದು ಘನವು.
ಬನ್ನಗಳು ಒದಗಿ ಬರೆ ಎದೆಗೆಡದೆ ನಿಂತಿರುತ,
ಉನ್ನತದ ಸತ್ಪುರುಷನೋಲು ದೃಢವಿಹುದು. ೫

ಬಿರುಗಾಳಿ ಮಳೆ ಬಿಸಿಲುಗಳಿಗೆ ಮೈಯನೊಡ್ಡಿ,
ಇರುಳು ದಿವದಲಿ ಗಂಟೆಗಳನು ತಾ ಹೊತ್ತು.
ಪರಹಿತದ ಏಕಾತ್ಮ ಚಿಂತನೆಗೆ ಮನವೊಡ್ಡಿ,
ಮೆರೆವುತಿಳೆಯಲ್ಲಿರುವುದೀ ದೀಪಗೃಹವು. ೬

ಎತ್ತಿ ಜನುಮವನು ಈ ಭವದೊಳಗೆ ಮಾಡುವುದು,
ಉತ್ತಮದ ಪರಹಿತದ ಕಾರ್ಯಗಳ ಮನುಜ!
ಹತ್ತಿಬಹ ಎಡರುಗಳಿಗಂಜದೇ ಸ್ವಾರ್ಥವನು,
ಕಿತ್ತು ಬಿಡುವುದೆ ನಮಗೆ ಪುಣ್ಯಕ್ಕೆ ಹಾದಿ. ೭

---

## ಅಳಿಯಕಟ್ಟು.

ತುಳುವ ರಾಜ್ಯದ ಬಾರಕೂರಿನ ಹಳೆಯ ವೈಭವ ಕಾಲದಿ,
ಹೊಳೆಯುತಿದ್ದನು ದೇವಪಾಂಡ್ಯನು, ಕಳೆದು ಕಾಲವ ತೋಷದಿ ೧

ದೇವಪಾಂಡ್ಯನು ಬಾರಕೂರಿನ ಸಾವುಕಾರನು, ಧನಿಕನು;
ಕಾವ ರಾಜನ ತೆರದಿ ಮೆರೆದನು, ಸಾವುಕಾರನು ಜೈನನು. ೨

ಹಡಗು ಒಂದನು ಮಾಡಲೋಸುಗ ಬಡಗಿಯವರನು ಕರೆಸಿದ.
ಅಡವಿಗವರನು ಒಡನೆ ಕಳುಹಿದ, ಕಡಿಯೆ ಮರಗಳ ಯೋಗ್ಯದ ೩

ಒಂದು ಮರದಲಿ ಭೂತವೊಂದದು ಚಂದದಿಂದಲಿ ನೆಲೆಯನು,
ಮಂದಿ ಕಾಣದ ತೆರದಿ ಮಾಡುತ, ಒಂದೆ ಇದ್ದುದು ತೋಷದಿ. ೪

ಅದರ ಇರವನು ಅವರು ಅರಿಯದೆ, ಬಿಡದೆ ಕಡಿದರು ಮರವನು.
ಒದಗಿಸಿತ್ತರು ಒಡನೆ ಹಡಗವ ಕಡಿದ ವೃಕ್ಷದಿ ಕ್ಷಿಪ್ರದಿ. ೫

ಮುದದಿ ಬಂದನು ದೇವಪಾಂಡ್ಯನು, ಅದನು ಇಳಿಸಲು ನೀರಿಗೆ.
ಕದಲಲಾರದು ಹಡಗು ಅಲ್ಲಿಂ, ಹದನ ತಿಳಿಯದು ಪಾಂಡ್ಯಗೆ. ೬

ಒಡನೆ ಕೇಳಿತು ಕೂಗು ಒಂದೈ ಪೊಡವಿ ಬಿರಿಯುವ ತೆರದಲಿ.
ನಡುಗಿ ಮಂದಿಯು ಕಡೆಗೆ ನಿಂದರು, ನುಡಿಯ ಕೇಳುವ ನೆವದಲಿ. ೭

ಸ್ವರವು ಎಂದಿತು "ನರನ ಒಪ್ಪಿಸು ತರಿಸಿ ಅರ್ಪಿಸು ಮೆಚ್ಚಿಸು,
ಸರಿಯಲಾರದು ನಾವೆ ನೀರಿಗೆ, ಬರಿಯ ಯತ್ನವು ಸಾಗದು." ೮

ಭೂತರಾಜನು ನುಡಿಯಲೀತೆರ ವ್ಯಥೆಯನಾಂತರು ಕೆಲವರು
ವೀಥಿ ಹಿಡಿದರು ಭೀತಿ ಪಡೆದರು ಮಾತನಾಡದೆ ಸಾರ್ದರು. ೯

ಜೀವ ಹಾರಿತು, ಸೋವು ತಿಳಿಯಿತು ದೇವಪಾಂಡ್ಯಗೆ ಒಡನೆಯೆ,
ಸಾವಧಾನದಿ ಸಾರಿ ಹೇಳಿದ ವಿವರವೆಲ್ಲವ ಪತ್ನಿಗೆ! ೧೦

ಪತಿಯ ಮಾತನು ಕೇಳಿದಾಗಲೆ ಸತಿಯು ರೇಗುತ ನುಡಿದಳು—
'ಸತತ ವೀಯೆನು ಸುತನನೆ'ನುತಾ ಪಿತನ ಮನೆಯನು ಸಾರ್ದಳು. ೧೧

ಏಳಲಾರನು ದೇವಪಾಂಡ್ಯನು, ತಾಳಲಾರನು ದುಃಖವ,
'ನಾಳ ಕೊಯ್ದಳೆ ಪತ್ನಿ' ಎನುತವ ಗೋಳ ಹಾಕುತಲೆಂದನು— ೧೨

"ಕರವ ಹರುಷದಿ ಪಿಡಿದ ಮಡದಿಗೆ ಕರುಣೆಯೆಲ್ಲವು ಅಡಗಿತೆ!
ತರಳೆಯರ ನಾ ನಂಬಲೆಂತೈ ಧರೆಯೊಳೀ ಗತಿಯಾಯಿತೆ? ೧೩

ಕಷ್ಟಕಾಲದಿ ಬಿಟ್ಟುಪೋದಳು ದುಷ್ಟ ಹೆಂಗುಸು ರಕ್ಕಸಿ.
ಇಷ್ಟರೇತಕೆ? ಬಳಗವೇತಕೆ? ಕಷ್ಟಕಾಲದಿ ಒದಗದ? ೧೪
ಹಡಗು ಇಳಿಸುವ ರೀತಿ ತೋಚದು ದೇವನೊಬ್ಬನೆ ಬಲ್ಲನು!"
ನುಡಿದು ಈ ತೆರ ಶೋಕಗೊಳುತಿಹನೆಡೆಗೆ ಬಂದಳು ಸೋದರಿ. ೧೫

ಬಂದು ಕಂಡಳು, ನೊಂದುಕೊಂಡಳು; ಕಂದ ಜಯನನು ಕೊಟ್ಟಳು.
ಮುಂದೆ ಪ್ರಾಣವು ಬಂದು ತ್ರಾಣವು ನಂದಗೊಂಡನು ಪಾಂಡ್ಯನು. ೧೬

ಮರುಕ ಬಿಟ್ಟನು, ಹರುಷಪಟ್ಟನು; ಕರೆಸಿಕೊಂಡನು ಆಳ್ಗಳ
ತರಳ ಜಯನನು ಬಲಿಯ ಕೊಡುವರೆ ಭರದಿ ನಡೆದರು ಸರ್ವರು. ೧೭

ಬಲ್ಲವರೆ! ನೀವ್ ಕೊಲ್ಲಬೇಡಿರಿ; ಒಲ್ಲೆನೀತನ ಪ್ರಾಣವ.
ಕಲ್ಲು ತಾನದು ಮರುಗದೇ ನಿಮಗಿಲ್ಲವೇತಕೆ ಕರುಣೆಯು? ೧೮

ಎಂದು ಹೇಳುತ ಭೂತರಾಜನು ಮುಂದೆ ಕಣ್ಮರೆಯಾದನು.
ಮಂದಿಯಾಗಲೆ ದೂಡೆ ನಾವೆಯು ಮುಂದೆ ಸರಿಯಿತು ನೀರಿಗೆ. ೧೯

ಕೆಲವು ಕಾಲದ ಮೇಲೆ ಹಡಗವು ಹಲವು ದೇಶವ ಬಳಸುತ,
ನೆಲೆಗೆ ಬಂದಿತು; ಕೊನೆಗೆ ನಿಂದಿತು; ಚೆಲೆಯ ಒಡವೆಯು ತಾಳುತ. ೨೦

ಎಲ್ಲ ಒಡವೆಯು ಕೊಟ್ಟು ಜಯನಿಗೆ ಸೊಲ್ಲನೊಂದನು ಪಾಂಡ್ಯನು–
ಮೆಲ್ಲನುಸುರಿದನೆಲ್ಲ ಒಡವೆಯು ಸಲ್ಲಿತೀಗಲೆ ನಿನಗೆಯೆ. ೨೧

ಕಟ್ಟು ಹುಟ್ಟಿತು ಹೊಸತು ಈ ಪರಿ, ಪಟ್ಟವಾಯಿತು ಜಯನಿಗೆ.
ಪುಟ್ಟನನು ಭೂತಾಳನೆನ್ನುತ ಅಟ್ಟಹಾಸದಿ ಕರೆದರು. ೨೨

ಆಳಿದ ಬಳಿಕಾ ಮಾವನಾಸ್ತಿಯು ಅಳಿಯಗಪ್ಪುದು ಎನುತಲಿ,
ತುಳುವ ಜನರೊಳು ಸಾರತೊಡಗಿದನಳಿಯಕಟ್ಟನು ನಾಡಲಿ. ೨೩

---

## ಹಂಸವೂ ಕಾಗೆಯೂ.

**ಕಾಗೆ**— ಎಲೆ ಗೆಳೆಯ! ಮಾನವರಿಗುಪಕಾರವನ್ನು
ಸುಳಿಸುಳಿದು ನಾ ಗೈವೆನನುಗಾಲವಿನ್ನು
ಕೊಳಕು ದುರ್ವಾಸನೆಯ ನಿರ್ಮೂಲ ಗೈದು,
ತಳೆವೆ ನಾನಂದವನು; ನಿಂದಿಪರು ಬೈದು. ೧

ಪರಿಪರಿಯ ಸೇವೆಯನು ಗೈದರೆಯು ನನ್ನ
ತರತರದಿ ಬಡೆಬಡೆದು ಕೊಡುವರೈ ಬನ್ನ!
ದುರುಳರಹ ಜನರೆಲ್ಲ 'ಅಶುಭ' ನಾನೆಂದು
ಸರಸರನೆ ಎಸೆಯುವರು ಕಲ್ಲ ಹಾರೆಂದು! ೨

**ಹಂಸ**— ಹೀನ ನೀ ದೂರದಿರು ಜನರನ್ನು ಜೋಕೆ!
ಏನೆಲವೊ ಉಪಕಾರ ನಿನ್ನಿಂದ ಜನಕೆ?

ಮಾನವರಿಗುಪಕಾರಕಿಂತಧಿಕ ಗೋಳು
ಮಾನಿಪರೆ ಇರಲಾಗಿ ನನ್ನಂತೆ ಪೇಳು? ೩

ನಿನ್ನ ಪಡೆಗಿಲ್ಲವೈ ಜಗದಾದಿ ಅಂತ್ಯ;
ನಿನಗಿಲ್ಲ ಮೈಬಣ್ಣ ಜನರೊಪ್ಪುವಂಥ;
ಬಣ್ಣವೆಂತೂ ಕಪ್ಪು; ಸ್ವರವಿಲ್ಲ ಇಂಪು;
ಬನ್ನಗೊಳಿಪರು ಜನರು ಬಡಿದು ನಿನಗಿಂತು. ೪

**ಕಾಗೆ—** ಒದರದಿರು; ಮನುಜರಿಗೆ ನಿನ್ನಲ್ಲಿ ಪ್ರೀತಿ!
ಮುದದಿಂದ ಬಣ್ಣಿಪರು ಕವಿಗಳೀ ರೀತಿ—
ಮೊದಲು ನಿನ್ನಾಗಮನವೇ ಚಂದವಂತೆ!
ಉದಕ ಹಾಲಲಿ ನಿನ್ನಯಾದರ್ಶವಂತೆ! ೫

ಜಗದೊಳೀಪರಿ ನಿನ್ನ ಮಾನಿಸುತ್ತಿರುವ
ಬಗೆಯನೆನಗೊರೆಯುವೆಯ ಸಹಿತ ಕಾರಣವ.
ಸೊಗಸಿನಲಿ ನೀನೇನು ಪೇಳೆನಗೆ ನವಿಲೆ?
ಬಗುಳದಿರು ನಿನ್ನದೇಂ ಬಂಗಾರದೊಡಲೆ? ೬

**ಹಂಸ—** ಮನುಜರಿಗೆ ಅಪರೂಪವಾಗಿಹೆನು ರಾಯ!
ಮನಸಿಗಪರೂಪನೇ 'ಅಪರಂಜಿ' ಗೆಳೆಯ!
ದಿನ ನಿತ್ಯ ನಿನ್ನನ್ನು ಕಂಡು ಸಾಕಾಗಿ,
ಮುನಿದೆದ್ದು ಹೊಡೆಯುವರು ಹೋಗಬೇಕಾಗಿ. ೭

ಮುನಿಯಂತೆ ನಾನು ಚೆಲು ಮೌನದಿಂದಿಹೆನು.
ಗುಣಿ ಜನರ ಗೋಜಿಗಿಲ್ಲದೆ ಶಾಂತವಿಹೆನು;
ಮನ ಮೆಚ್ಚಿ ಸರಸಿಯಲಿ ವಾಸಿಯಾಗಿಹೆನು.
ಇನಿತಿರುವ ಎನ್ನ ವಿಭವಕ್ಕೆ ಎಣೆಯೇನು? ೮

ಚಿತ್ತಕಾಕರ್ಷವಹ ದೇಹದಿಂದಿರುವೆ.
ಮತ್ತೆ ಆದರ್ಶನಡೆಯಿಂದ ಕೂಡಿರುವೆ.
ಚಿತ್ತ ಮೆಚ್ಚುವ ಶುದ್ಧಹಾರವನೆ ಮೆಲುವೆ.
ಮತ್ತೆ ಪೃಥ್ವಿಯ ಸೊಬಗ ಮಣಿಯಂತೆ ಮೆರೆವೆ. ೯

ನೀರಸನು ನೀನಾದೆ ಸಾಮಾನ್ಯ ಪಕ್ಷಿ,
ಸಾರಸನು ನಾನು ಬಲು ಅಪರೂಪ ಪಕ್ಷಿ;
ಊರೆಲ್ಲ ಹಳಿಯುವರು, ನಿನಗೋರೆ ದೃಷ್ಟಿ.
ಸಾರಿ ಹೊಗಳುವರೆನ್ನ ಸೌಂದರ್ಯ ಸೃಷ್ಟಿ. ೧೦

**ಕಾಗೆ**— ಸಾಕು! ಸಾಕೆಲೆ!! ಜಂಭ ಒತ್ತಟ್ಟಗಿರಲಿ.
ಯಾಕೆ ಹಿಗ್ಗುವೆ ಸೊಬಗಿಗೀ ಲೋಕದಲ್ಲಿ?
ಶೋಕವಿದೆ ಮರಣವಿದೆ ನಿನಗೆ ತಿಳಿದಿರಲಿ.
ಯಾಕೆಲ್ಲ ವಾಗ್ವಾದ ನಮಗಕಾಲದಲಿ? ೧೧

ಉಪಕಾರ ಮಾಡಿದರೆ ಲೋಕದೊಳು ಈಗ
ಅಪಕಾರ ಮಾಡುವರು ಕೃತಘ್ನರೈ ಬೇಗ.
ತುಪ್ಪಕ್ಕೆ ಅಧಿಕ ಬೆಲೆ ಇದ್ದರೇನಾಯ್ತು?
ಉಪ್ಪಿಲ್ಲದೂಟವೇ? ಪೋಪೆ, ಸಾಕಾಯ್ತು! ೧೨

---

## ಸೆರೆಯಾಳು.

ಮಾನ ಹೋಯಿತು, ಹಾನಿಯಾಯಿತು,
ಹೀನ ಬಾಳ್ವೆಯು ಒದಗಿತು.
ಸ್ಥಾನ ಹೋಯಿತು, ಊನವಾಯಿತು,
ಶ್ವಾನಜನುಮವು ಬಂದಿತು. ೧

ಕರುಣೆ ತೋರರು, ಮೊರೆಯ ಕೇಳರು,
ಅರಸನಾಳ್ಗಳು ಕ್ರೂರರು!
ಕರೆಸಿ ಎನ್ನನು, ಇರಿಸಿ ಬಂಧನ,
ತೊರೆದು ಪೋದರು ಜಾಣರು. ೨

ತಡೆಯಲಾರದೆ ಮಡದಿ ಮಕ್ಕಳು
ಬಿಡದೆ ಗೈಯುವ ಗೋಳನು,
ಕಡವ ಮಾಡಿದೆ; ಕಡೆಗೆ ಸಾಲವು
ಒಡನೆ ಏರಿತು; ಹೆಚ್ಚಿತು. ೩

ಹುಟ್ಟಿ ಕಡವದು ಸೃಷ್ಟಿಯೊಳು ಬಲು
ಕೆಟ್ಟ ಬಡವನು ಕೆಟ್ಟನು.
ದುಷ್ಟನಾದೆನು ಭ್ರಷ್ಟನಾದೆನು;
ಕಷ್ಟಪಡುವೆನು ಲೋಕದಿ. ೪

ಮೂಲವಿಲ್ಲವು ಸಾಲ ಸಲಿಸಲು;
ಕಾಲು ಕಡಿದಂತಾಯಿತು.
ಪಾಲುಮಾರಿಕೆ ಮಾಡಲಿಲ್ಲವು.
ಸಾಲವೆನ್ನನು ಕೆಡಿಸಿತು. ೫

ಎಲ್ಲಿ ಮಿತ್ರರು? ಎಲ್ಲಿ ಪುತ್ರರು?
ಎಲ್ಲರಿದ್ದರು ಹಿಂದಕೆ!
ಸೊಲ್ಲನಾಡರು, ಎಲ್ಲರೋಡ್ವರು!
ಇಲ್ಲವಾದರೆ ದೂರಕೆ! ೬

ಅಣ್ಣ ಬಾರನು! ತಮ್ಮ ತೋರನು!
ಕಣ್ಣನೀರನು ಮಿಡಿವೆನು.
ಬನ್ನಬಡುವೆನು, ಸುಣ್ಣವಾದೆನು;
ಪುಣ್ಯವಿಲ್ಲದೆ ಬೆಳೆದೆನು. ೭

ತಾನೆ ಶತ್ರುವು, ತಾನೆ ಮಿತ್ರನು,
ಎನಿದೇನ್ನೈ ಚಿತ್ರವು!
ಹೀನ ಕರ್ಮದಿ ನಾನು ಸೊರಗುವೆ.
ಏನು ದೈವದ ಮಾಯೆಯು! ೮

ಊರ ಸಾರುತ ಮನೆಯ ಸೇರುತ,
ತೋರಲೆಂತೀ ಮುಖವನು.
ಪಾರುಗೊಳಿಸೆಲೆ! ಸಿರಿಯ ರಮಣನೆ!
ಸಾರಿ ಬೇಡುವೆ, ಬಾಗುವೆ. ೯

---

## ಮಳೆಗಾಲದ ದುರ್ದಿನ.

ಮೂಡದೆಯೆ ದಿನಕರನು ಉಂಟಾದ ದಿನವು,
ಮೋಡರಾಜನು ವಿಜಯಗೊಂಡ ಕರಿದಿನವು;
ನಾಡಿದು ನಿರುತ್ಸಾಹ ತಳೆದಿದ್ದ ದಿನವು,
ಕೂಡಿ ಮಳೆ ಸುಳಿಗಾಳಿ ಸುಳಿದ ದುರ್ದಿನವು. ೧

ದಿನಮಣಿಯು ಆಗಮನವಿರದೆ ಬೇಸತ್ತು,
ಜನನಿ ಭೂಮಿಯೆ ತಾನು ಮುಸುಕ ಧರಿಸಿತ್ತು.
ದಿನರಾತ್ರಿ ಗಗನದಲಿ ಕರಿ ಮೋಡವಿತ್ತು.
ಮನ ಹರಿಪ ಬೇರೊಂದು ಶಿಖರದಂತಿತ್ತು. ೨

ಗಡಗುಟ್ಟ ನಡುಗಿಸುವ ಕಡು ಶೀತಗಾಳಿ,
ಎಡೆಬಿಡದೆ ಬೀಸಿದುದು ಶಕ್ತಿಯನು ತಾಳಿ.
ಗುಡುಗುಡೆನ್ನುವ ಸಿಡಿಲದೊಂದೊಂದು ಬಾರಿ,
ಗುಡುಗುತಿದ್ದಿತು, ಮೊದಲು ಮಿಂಚನ್ನು ಕಾರಿ. ೩

ಹತ್ತು ಹೊಡೆಯಿತು, ಹಕ್ಕಿಗಳು ಗೂಡು ಬಿಟ್ಟು,
ಸುತ್ತಲೊಲ್ಲವು ಹೊರಗೆ ಹರಿಗೆ ಪೊಡಮಟ್ಟು.
ಎತ್ತಲುಂ ಕಾಗೆಗಳ 'ಕಾಕಾ'ರವಿಲ್ಲ;
ಮತ್ತೆ ಚೆಲು ಹಕ್ಕಿಗಳ 'ಚಿಳಿಪಿಳಿ'ಗಳಿಲ್ಲ. ೪

ಹುಡುಗ ಹೊರ ಹೊರಡದಿರೆ ಯಜಮಾನಿ ಕೂಗಿ,
'ಬಿಡು ಬೇಗ ನಡಿ' ಎಂದು ನುಡಿದಳ್ಳೈ ರೇಗಿ.
ಹಿಡಿದು ಗೊರಗನು ಹುಡುಗ ದನಗಳನು ಬಿಡಲು,
ನಡೆಯಲೊಲ್ಲವು ಹೊರಗೆ, ನಡುಗಿದುದು ಒಡಲು. ೫

ಬಂದು ಅಂಚಿಗೆ ಗದ್ದೆಯನು ನೋಡುತಿದ್ದ,
ಅಂದದೆಳೆ ಬೆಳೆ ಕಂಡು ನಂದಗೊಳುತಿದ್ದ,
ಬಂದವರ ಕರೆಕರೆದು ಮಾತಾಡುತಿದ್ದ,
ಅಂದದೀ ಪರಿಯು ಮುಂಜಾನೆ ಕಳೆದಿದ್ದ— ೬

ಒಕ್ಕಲಿಗರಿಂದೆಲ್ಲ ಹೊರ ಬಂದುದಿಲ್ಲ.
ಪಕ್ಕದಲಿ ನಿಂತಿಣಿಕಿದರು ನಂದವಿಲ್ಲ.
ಉಕ್ಕಿಬಹ ಉದ್ಗಾರವೆತ್ತುತ್ತ ಕೆಲರು
ಪುಕ್ಕರಿದ್ದರು ಒಳಗೆ, ಹೊರಗೆ ಕಾಲಿಡರು. ೭

ಮುದುಕರೆಲ್ಲರು ಹಾಸು ಬಿಟ್ಟೇಳಲಿಲ್ಲ.
ಕದಲಲಾರರು ಬಾಲಕರು, ಪಾಠವಿಲ್ಲ.
ಹೊದೆದು ಕರಿ ಕಂಬಳಿಯು ತಾಯು ಕಾಡುತ್ತ,
'ಒದಗಿಸೈ ತಿನಿಸುಣಿಸು ಬೇಗ' ಎನ್ನುತ್ತ. ೮

ಎಲ್ಲೆಲ್ಲಿ ನೋಡಿದರು ಆಲಸ್ಯ ಬೀಡು!
ಇಲ್ಲವೈ ನಿಯಮ ಉದ್ಯೋಗಗಳ ನಾಡು!
ಎಲ್ಲೆಲ್ಲಿ ನೋಡಿದರು ಗೊಂದಲವೆ ಕೂಡಿ,
ಕಲ್ಲಿನಿಂ ಕಡೆಯಾಯ್ತು ಚಳಿಯಿಂದ ಬಾಡಿ. ೯

ದಿನಕರನು ಒಮ್ಮೆ ಬಲು ಆಯಾಸದಿಂದ
ಜನರನಿಣಿಕಿದನು ಬಲು ಶಾಂತ ಮುಖದಿಂದ
ಜನನಿ ಭೂಮಿಯು ಮೈಯ ಕೊಡವಿದಳು ಬೇಗ;
ದಿನಮಣಿಯ ನುಂಗಿದನು ಕರಿರಾಜನಾಗ. ೧೦

ಸುರಿಯಿತಾಗಲೆ ವರ್ಷ ಬುವಿಗೆ ನಭದಿಂದ.
ಹರಿದು ಹೋಯಿತು ಉದಕ ತೆರೆ ತೊರೆಗಳಿಂದ.
ಮುರಿದು ಹೋದವು ತೆವರಿಗಳು ರಭಸದಿಂದ.
ನರಳುತಿದ್ದರು ಮಂದಿ ಈ ರೀತಿಯಿಂದ. ೧೧

---

## ಅವ್ವನ ಅಳಲು.

**ಅವ್ವ**— ಪೊರೆಯೆನ್ನ, ಪರಮಾತ್ಮ! ಪರದೇಶಿಯಾದೆ;
ಪರರೀವ ಕಷ್ಟವ ಸೈರಿಸದಾದೆ;
ಅಶೋಕವನ ಸೀತೆ ನಾನಾಗಿ ಇರುವೆ;
ದುಶ್ಶಾಸನಂದೆಳೆದ ದ್ರೌಪದಿಯಿರುವೆ. ೧

ಮೊರೆಯಿಟ್ಟ ಮಾನಿನಿಯರ ನೀನು ಪೊರೆದೆ
ಮೊರೆಯಿಡುವೆನ್ನನು ಪಾಲಿಸು ದಯದೆ.

**ಮಗ—** ಮಾತೆಯೆ! ಈ ತೆರ ಕಾತರವೇಕೆ?
ಈ ತೆರ ಯಾತನೆಗೊಳುತಿಹುದೇಕೆ? ೨
ಉಡುವರೆ ದುಗುಲವು ನಿನಗಾಗಬೇಕೆ?
ತೊಡುವರೆ ನಿನಗಾಭರಣವು ಬೇಕೆ?
ವಾಸಿಸೆ ಸುಂದರ ಮಂದಿರ ಬೇಕೆ?
ಪೋಷಿಸೆ ದೇಹವ ಧನ ಧಾನ್ಯ ಬೇಕೆ? ೩

**ಅವ್ವ—** ಕಂದನೆ! ನನಗೀಗ ಆವುದು ಬೇಡ;
ಬಂದಿಹ ಕಷ್ಟದಿ ಜನುಮವೆ ಬೇಡ.

**ಮಗ—** ನಿನಗಿಂದು ಬಂದಿಹ ಕಷ್ಟವದೇನು?
ಮನದೊಳು ಮರುಗುವ ಕಾರಣವೇನು? ೪

**ಅವ್ವ—** ಕಂದನೆ! ಕಾಣದೆ ಕೈಕಾಲ ಮೇಲೆ
ಬಂಧಿಸಿ ಇರುತಿದೆ ಈ ಸಂಕೋಲೆ.
ಅತ್ತಿತ್ತ ಸರಿಯಲು ಆರೆನು ನಾನು
ಅತ್ತತ್ತು ಕೊರಗುವೆ, ನೋಡುವಿ ನೀನು. ೫

**ಮಗ—** ಅಯ್ಯಯ್ಯೊ! ಮಾತೆಯೆ! ಬಂಧನವಾಯ್ತೆ!
ಅಯ್ಯಯ್ಯೊ! ನೀನಿಂತು ಕೊರಗುವಂತಾಯ್ತೆ!
ಆರೊಳು ಪೇಳಲಿ ಕಷ್ಟವನಿದನು
ಆರಮ್ಮ ನಿನ್ನನು ಬಂಧಿಸಿದವನು? ೬

**ಅವ್ವ—** ಆರೆಂದು ನಾನರಿಯೆ, ಮಲಗಿದ್ದೆನಾಗ
ಜೋರಿನಿಂದೇಳಲು ಹಾಕಿತ್ತು ಬೇಗ;
ಅನ್ಯರು ಎಂದೊಮ್ಮೆ ತಿಳಿಯುವೆ ಮಗನೆ!
ನನ್ನವರೆಂದೊಮ್ಮೆ ಮರುಗುವೆ, ಮಗನೆ! ೭

**ಮಗ—** ಅಮ್ಮ! ನೀನೀಗಲೆ ಧೈರ್ಯವ ತಾಳು;
ಸುಮ್ಮನೆ ಬಿಡುವೆನೆ ನಿನ್ನನು ಪೇಳು?

ನೀನೆಮ್ಮ ಹೊತ್ತಿಹ ಹೆತ್ತಿಹ ತಾಯಿ!
ನೀನೆಮ್ಮ ಪ್ರೀತಿಯಿಂ ಸಲಹಿದ ತಾಯಿ! ೮

ಜನರಿಗೆ ಜ್ಞಾನವ ನೀಡಿದ ತಾಯಿ,
ಮನುಜರ್ಗೆ ವೇದವನಿತ್ತಿಹ ತಾಯಿ,
ಲೋಕಕ್ಕೆ ವೀರರ ಕಳುಹಿದ ತಾಯಿ,
ಶೋಕಿಪುದೇತಕೆ ಋಷಿಗಳ ತಾಯಿ! ೯

**ಅವ್ವ—** ಕಂದನೆ! ನಾನಿಂದು ಬಂಧನ ವಾಸಿ;
ಇಂದು ನಾನೆನ್ನಯ ಮನೆಯೊಳೆ ದಾಸಿ.
ಹಿಂದಿನ ವೈಭವ ಸಂಪದವೆಲ್ಲ
ಎಂದಿಗೆ ದೊರೆವುದೊ! ದೇವನೆ ಬಲ್ಲ. ೧೦

ಮಕ್ಕಳು ಅನ್ಯರ ದಾಸರು ಎಲ್ಲ;
ದಿಕ್ಕಿಲ್ಲದೆನ್ನನು ಮರೆತಿಹರಲ್ಲ;
**ಮಗ—** ಆತುರವನು ಬಿಡು, ಪ್ರೀತಿಯ ಮಾತೆ!
ಕಾತರವನು ಬಿಡು, ಲೋಕವಿಖ್ಯಾತೆ! ೧೧

ಕಟ್ಟಿದ ಸಂಕೋಲೆಯಿದನೀಗ ಜಡಿದು
ತಟ್ಟನೆ ಪುಡಿಗೈದು ಬಿಡಿಸುವೆ ಕಡಿದು.
**ಅವ್ವ—** ದುಡುಕಲು ಬಾರದು, ತಡೆ, ಎನ್ನ ಪುತ್ರ!
ಪಡಿಸೆ ನೀ ಬಲವಂತ ಹರಿವುದು ರಕುತ. ೧೨

ಬಲವಿಲ್ಲ ಗೆಲವಿಲ್ಲ ಸಹಿಸಲು ಆರೆ;
ಕೆಲವರು ಹಿಂದಕೆ ದುಡುಕಿ ಕೈಯ್ಯಾರೆ
ವೇದನೆಯಿತ್ತರು, ಫಲವಿಲ್ಲ ನೋಡು!
ಕಾಲೆಲ್ಲ ಹುಣ್ಣಾಗಿ ಇರುವುದ ನೋಡು. ೧೩

**ಮಗ—** ಆರಮ್ಮ! ನಿನ್ನನು ಬಂಧಿಸಿದವನು?
ಆರಲ್ಲಿ ಇರುವುದು ಕೀಲಿಕೈ ಅದನು
ಈಗಲೆ ತರುವೆನು ಈಕ್ಷಣ ಪೋಗಿ,
ಬೇಗನೆ ಪೇಳಮ್ಮ! ವಿಸ್ತಾರವಾಗಿ. ೧೪

**ಅವ್ವ**— ಪೇಳಲು ನಿನಗಿದನಂಜುವೆ ಬಾಲ!
ಪೇಳುವುದೇತಕ್ಕೆ? ಫಲವಿಲ್ಲ ಬಾಲ!
ಹಿಂದಕೆ ಕೇಳುತ ಹೋದವರೆಲ್ಲ
ಇಂದಿಗು ಬಂದಿಲ್ಲ, ಕೊರಗುವೆನಲ್ಲ! ೧೫

**ಮಗ**— ಅಂಜಿಕೆ ಯಾಕಮ್ಮ? ಅಂಜದಿರಮ್ಮ,
ಅಂಜಿಕೆಯಾಂತರೆ ಕೆಲಸವೆಂತಮ್ಮ,
ನಿನಗಾಗಿ ಗುಂಡಿನ ಬಾಯಿಗು ಬೀಳ್ವೆ,
ನಿನಗಾಗಿ ಕತ್ತಿಯ ಬಾಯಿಗು ಬೀಳ್ವೆ. ೧೬

ನಿನಗಾಗಿ ಸೆರೆಮನೆಗಾದರು ಹೆದರೆ,
ನಿನಗಾಗಿ ಪ್ರಾಣವನೀಯಲು ಬೆದರೆ.
**ಅವ್ವ**— ಗುಟ್ಟಾಗಿ ಪೇಳುವೆ ಕೇಳೆನ್ನ ಕಂದ!
ತಟ್ಟನೆ ಜಯಿಸುತ ಬಾರೆನ್ನ ಕಂದ! ೧೭

**ಮಗ**— ದುಷ್ಟನ ಕೈಯಿಂದ ಕೀಲಿಕೈ ತಂದು,
ಕಷ್ಟದ ಬಂಧನ ಬಿಡಿಸುವೆನಿಂದು;
ನಿನ್ನಯ ಕೃಪೆಯಿಂದ ಜಯಿಸುತ ಬರುವೆ,
ನಿನಗಾಗಿ ಜೀವವ ತೆತ್ತರು ತೆರುವೆ. ೧೮

('ಬಲಿದಾನ'ವನ್ನು ಆಧರಿಸಿ, ಬರೆದುದು.)

---

## ಕೊಳಲ ಗಾನ.

**ನಿನ್ನ** ಕೊಳಲಿನ ಗಾನ–
ವೆಸುವ ಸುರುಳಿನ ನೇಣ–

ದಿಂದೆನ್ನ ಮನ ಕೊಡವ ಬಿಗಿದು ಬಳಿಗೆಳೆಯ್ಯೊ!
**ನಿನ್ನ** ಕೊಳಲಿನ ಗಾನ–
ವೆನುವ ಬೆಳಕಿನ ಪೋಣ–
ವನ್ನು ಪೊತ್ತಿಸಿ ಎನ್ನ ಮನದ ತಮ ಕಳೆಯ್ಯೊ! ೧

ನಿನ್ನ ಕೊಳಲಿನ ಗಾನ–
ವೆನುವ ಹೊಳಪಿನ ಬಾಣ–
ವನ್ನೆಸೆದು ಮನಸಿನಘ ರಕ್ಕಸನನಿರಿಯೈ!

ನಿನ್ನ ಕೊಳಲಿನ ಗಾನ–
ವೆನುವ ಸುಮಧುರ ಜೇನ
ಎನ್ನ ಹೃದಯದ ಕಹಿಯು ಕಳೆಯಲಿಕೆ ಸುರಿಯೈ! ೨

ನಿನ್ನ ಕೊಳಲಿನ ಗಾನ–
ವೆನುವ ಚಲಿಸುವ ವಿಮಾನ–
ನಿಳಿಸಿ ಎನ್ನಯ ಮನ ಕೆರೆಗೆ ಕೊಳೆಯನುಣಿಸೈ!

ನಿನ್ನ ಕೊಳಲಿನ ಗಾನ–
ವೆನುವ ಚಿಗಿಯುವ ಏಣ–
ನಿಂದ ಮಮ ಮನ ವಿಪಿನದಘ ಪೈರ ತಿನಿಸೈ! ೩

ನಿನ್ನ ಕೊಳಲಿನ ಗಾನ–
ವೆನುವ ದಿವ್ಯ 'ಕ್ವಿನಿನ'
ತಿನಿಸಿ ಪಾತಕವೆಂಬ ಜ್ವರಗಡ್ಡೆ ಕಳೆಯೈ!

ನಿನ್ನ ಕೊಳಲಿನ ಗಾನ–
ವೆನುವ ಪಂಚಪ್ರಾಣ–
ದಿಂದ ಮಮ ಮನ ಕಳೇಬರಕೆ ಸೊಬಗೆಳಸೈ! ೪

('ಕಿರಿಯರ ಪ್ರಪಂಚದ' ವಿಟ್ಠಲ)

---

## ಗುರುಗಳಿಗೆ.

ಪರಿಶುದ್ಧಾತ್ಮರೆ! ದಿವ್ಯ ಚರಣದ ಸೇವೆ ಮಾಡುವ ಧನ್ಯನು.
ಪರಮ ಗುರುಗಳ ಪ್ರೇಮ ಜಲದೊಳು ಮೀವ ತನುವಿದು ಮಾನ್ಯವು –ಪಲ್ಲ–

ಮೆರೆಯೆ, ಗುಣಗಣವಿಹುದೊ ಏನೋ ಮಹಿಮನಂದದೆ ತಿಳಿಯೆನು,
ಸುರರ ಧೇನುವಿನಂತೆ ಕೋರಿದ ಫಲವ ಕೊಡುವಿರೆ ಅರಿಯೆನು.
ತಮ್ಮ ಸೇವೆಯೆ ಪಾವನ;
ತಮ್ಮ ನೆನೆವುದೆ ಜೀವನ.
ತಮ್ಮ ಬಳಿಯೊಳು ಬದುಕಿ ಅಳಿಯಲು, ಆತ್ಮ ಸೇರದೆ ದೇವನ? ೧

ತಮ್ಮ ಜ್ಞಾನದ ಬೆಳಕಿನಿಂದಲಿ, ನಮ್ಮಜ್ಞಾನವ ನೀಗುತ;
ಧರ್ಮವೂರುತಿಯಂತೆ ಮೆರೆವಿರಿ ಶಿಷ್ಯರೆಮ್ಮನು ಮೆರೆಸುತ.
ತಮ್ಮ ಸ್ಮರಣೆಯು ತೊರೆಯೆನು;
ತಮ್ಮ ಮಹಿಮೆಯು ಮರೆಯೆನು.
ತಮ್ಮ ಕೀರ್ತಿಯ ಕೇಳ್ವ ಭಾಗ್ಯವನೀಶನೀಯಲಿ ಬೇಡುವೆ. ೨

ತಮ್ಮ ಕೀರ್ತಿಯ ಜ್ಯೋತಿ ನಾಡನು ಸತತ ಬೆಳಗಲಿ ಬಾಳಲಿ!
ತಮ್ಮ ಸೇವೆಯೊಳೆನ್ನ ದೇಹವು ಎನ್ನ ಚಿತ್ತವು ಸವೆಯಲಿ.
ತಮ್ಮ ಚರಣದ ಕಮಲವು,
ಎನ್ನ ಶಿರಸಿನ ಕಮಲವು,
ಒಂದುಗೂಡುತ ಇರಲಿ ಬೆಳಗುತ ನನ್ನ ಧರ್ಮದ ಗುರುಗಳೆ! ೩

## ಕರ್ತವ್ಯ.

ಅನುದಿನ ಮಾರುತ ಜಗದಲಿ ಬೀಸುತ,
ಜನರಿಗೆ ತೋರುತ, ಪ್ರಾಣವನೀಯುತ,
ಮುನಿಯದೆ ಇರುವನು; ದಣಿಯದೆ ಬರುವನು.
ನೆನೆಯಿರಿ ಮುನಿದರೆ, ನಮ್ಮನು ತೊರೆದರೆ! ೧

ತನ್ನಯ ಪಥದಲಿ ತಿರುಗುತ ಚಂದ್ರನು,
ಉನ್ನತ ಕಾರ್ಯವನೆಸಗುತಲಿಂದ್ರನು
ಸನ್ನುತ ಭಾಸ್ಕರ ಬೆಳಗುತ ಜಗವನು,
ಮನ್ನಣೆ ಪಡುವರು; ಸುಖವನು ಕೊಡುವರು. ೨

ತಿರೆಯುಲಿ ಅವರನು ನಿಂದಿಸೆ, ವಂದಿಸೆ,
ಪರಿಪರಿ ತೆರದಲಿ ಕಂದಿಸೆ, ಕುಂದಿಸೆ,
ಮರೆಯರು ಕೃತ್ಯವ ತೊರೆಯರು ನಿತ್ಯವ
ಚರಿಸರು ಕೋಪವ ಧರಿಸರು ತಾಪವ. ೩

ಒಂದೇ ತೆರದಲಿ ಬಂದೇ ಭರದಲಿ
ಹಿಂದೆಯು ಶಾಂತಿಯು ಮುಂದೆಯು ಶಾಂತಿಯು-
ನೆಂದಿಗು ಬೀರ್ವರು, ಚಂದದಿ ತೋರ್ವರು.
ಇಂದಿಗು ಹಿಂದಿಗು ಎಂದಿಗು ಇರುವರು. ೪

ತಿಳಿದಿದ ಮಾನವ ಕಳೆಯುತ ಜ್ಞಾನವ
ಇಳೆಯುಲಿ ಕಾರ್ಯವ ಮಾಡದೆ ಪ್ರಾಯುವ
ಕಳೆದರೆ ಬಾಧಕವಿರುವುದೆ ಸಾಧಕ?
ತಳೆ ನೀ ಕೆಲಸವ, ಕಳೆ ನೀ ಅಲಸವ. ೫

ಮನುಜನೆ! ನಿನ್ನನು ಹೊಗಳಲಿ, ತೆಗಳಲಿ,
ಮನಸಿಲಿ ಕನಸಿಲಿ ನುತಿಸಲಿ, ಮಥಿಸಲಿ,
ಘನತರ ಶಾಂತಿಯುಲಿಡುತಲೆ ಪ್ರೀತಿಯು
ಅನುದಿನ ಕಾರ್ಯವ ಮಾಡುತ ಬಾಳ್ಮೆ! ೬

---

## ನರಿಯೂ ಕೋತಿಯೂ.

**ನರಿ—** ಏರಿದ ಮರದೊಳು ಹಾರುತ ಮುದದೊಳು,
ಯಾರನು ಅಣಕಿಪೆ ವಾನರನೆ!
ಮೋರೆಯು ತಿರುಗಿಸಿ ಓರೆಯು ನೋಟದಿ
ಪೋರನೆ! ನೋಡುವುದಾರನೆಲೆ! ೧

ನೀರನು ಕುಡಿಯುಲು ಬಂದಿಹ ಎನ್ನನು
ಬಾರಿಗು ಬಾರಿಗು ಅಣಕಿಪೆಯು?
ಕಾರಣವಿಲ್ಲದೆ, ನ್ಯಾಯುವನೊಲ್ಲದೆ,
ಚೋರನೆ! ನಿಂದಿಪೆಯೇಕಿಂದು? ೨

ಅರಿತಿಹೆ ನಿನ್ನಯ ಪರಿಯನು ವನಚರ!
ಇರಿಸಿದ ಬುತ್ತಿಯ ತಿಂತೇಗಿ,
ಕರದೊಳು ಉಳಿದಿಹ ಮೊಸರನು ಆಡಿನ
ಮೋರೆಗೆ ಒರಸಿದೆ ನೀ ಹಿಂದೆ. ೩

**ಕೋತಿ**—ಬಲ್ಲೆನು ನಿನ್ನಯ ಕಳ್ಳನ ಕಥೆಯನು;
ಮೆಲ್ಲನೆ ಹಳ್ಳಿಯ ನೀ ಸಾರಿ,
ಮುಳ್ಳಿನ ಸೌತೆಯ ಕೋಳಿಗಳೆಲ್ಲವ
ಕೊಲ್ಲುತ ಸವಿಯುವೆ; ಜಂಬುಕನೆ! ೪

ಹಿಂದಕೆ ಕಾಗೆಯ ಚಂದದೆ ಹೊಗಳುತ
ಪೊಂದಿದೆ ಮಾಂಸವ ಕಪಟದಲಿ.
ಗಾರ್ದಭವೊಂದನು ಮದುವೆಗೆ ಎನ್ನುತ
ಸಿಂಹದೆ ಕೊಲ್ಲಿಸಿ ನೀ ತಿಂದೆ. ೫

**ನರಿ**— ಸಿಗಿದಿಹ ಮರದೊಳು ಬಿಗಿದಿಹ ಗೂಟವ
ತೆಗೆದವನಾರದು? ಬಾಲವನು
ಹೊಗಿಸುತ ಎಡೆಯೊಳು ಬಗೆಬಗೆ ತೆರದೊಳು
ನಗೆಗೊಳಗಾದವನಾರಯ್ಯ? ೬

**ಕೋತಿ**—'ನಾಳೆಗೆ' ಎನ್ನುತ ಹೆಣವನು ಭುಜಿಸದೆ
ಬಿಲ್ಲಿನ ನಾರನು ಜಗಿಯುತ್ತ
ನಿನ್ನಯ ಕುಲಜನು ಕ್ಷಣದೊಳು ಮಡಿದನು;
ತನ್ನಯ ಆಶೆಯು ಮಿತಿ ಮೀರೆ. ೭

**ನರಿ**— 'ಪಾಲನು ಮಾಡುವೆನೆ'ನ್ನುತ ತ್ರಾಸಿನ
ಕೋಲನು ಪಿಡಿಯುತ ನೀ ಬಂದು,
ಬೆಣ್ಣೆಯನೆಲ್ಲವ ಬೆಕ್ಕುಗಳಿಂದಲಿ
ವಂಚಿಸಿ ತಿಂದವ ನೀನಲ್ಲೆ? ೮

**ಕೋತಿ**—ಕಡಲನು ದಾಂಟುತ ಪೊಡವಿಜೆ ಸೀತೆಯ
ಬಿಡದೆಯೆ ಅರಸಿದ ಪವನಜನ—

ಕುಲದೊಳು ಜನಿಸಿದವರು ಎಲೆ! ಗುಡಿಯಲಿ
ನಿತ್ಯವು ಪೂಜೆಯಗೊಂಬವರು. ೯

**ನರಿ**— ಕಾಡೊಳು ಪೂರ್ವದಿ ಕೇಸರಿ ವ್ಯಾಘ್ರಗಳ
ನೋಡಿದ ಕ್ಷಣದೊಳು ತಾ ಪಿಡಿದು
ಆಡುತ ಭುಂಜಿಸಿ ದರ್ಪದಿ ಬದುಕಿರೆ,
ಕಾಡಿನ ಬಾವಿಗೆ ಕೆಡಹಿದೆನು. ೧೦

**ಕೋತಿ**—'ಭಾರಿ ಕುತಂತ್ರವ ಬಲ್ಲೆನು' ಎನ್ನುತ
ಬೇಟೆಯಗಾರನ ನಾಯಿಗಳ
ಮಧ್ಯದಿ ಸಿಲುಕಿದ ನರಿಯದು ಯಾವುದು?
ಬೇಗನೆ ದಯದೊಳು ಪೇಳುವೆಯ? ೧೧

**ನರಿ**— ನಿಂದೆಯು ಗೈವುದು ಅಂದವೆ? ವಾನರ!
ಮುಂದಕೆ ಗೆಳೆಯರು ನಾವಯ್ಯ?
ಇಂದಿನ ಜಗಳವ ಬಿಟ್ಟೆನು, ದಿಟವಿದು,
ಮುಂದಕೆ ಚಂದದಿ ನಾವಿರುವ! ೧೨

ನಾನೂ ನೀನೂ ನೆನೆಯುವ ಭೇದವು
ನಮ್ಮಯ ಪತನಕೆ ಕಾರಣವು,
ನಾನೂ ನೀನೂ ಭೇದವ ಬಿಡುತಲಿ
ಪ್ರೇಮದಿ ಬಾಳುವ ಕಾಲವಿದು. ೧೩

ಕುಲವದು ಮನ್ನಣೆ ಪಡೆಯದು ವಂದನೆ
ಶೀಲವೆ ಶ್ರೇಷ್ಠವು ಲೋಕದೊಳು.
ಮೇಲಿನ ಜಾತಿಯು ಕೀಳಿನ ಜಾತಿಯು
ಎಲ್ಲವು ವ್ಯರ್ಥವು ಯೋಚಿಸಲು. ೧೪

## ಉದ್ಯೋಗ.

ಪುರುಷಗೆ ವೃತ್ತಿಯೆ ವರ ಲಕ್ಷಣವೈ
ಶಿರದಲಿ ಇಟ್ಟಹ ತಿಲಕದೊಲು
ನಿರತವು ಸಲಿಲವು ಇರುತಿಹ ಸರಸಿಯು
ಮೆರೆವುದು ತಿರೆಯೊಳು ಫಲವಿಹುದು. ೧

ಪರಿಮಳವಿಲ್ಲದ ವರ ರೂಪಿನ ಸುಮ—
ವಿರೆ ಫಲವೇನೈ ಜಗದೊಳಗೆ?
ವರನಲಿ ಭಕ್ತಿಯು ಇರದೊಡೆ ತರುಣಿಗೆ
ಸುರಸುಂದರ ತನು ಫಲವೇನು? ೨

ತಿರಿದುಣ್ಣಲು ಬೇಡಿರಿ ಬಾಲರೆ ಕಲಿ—
ಯಿರಿ ಬಲು ಸೊಗಸಿನ ಕೆಲಸವನು
ಸರುವರು ಮನ್ನಣೆ ಕರೆಯುತ ಕೊಡುವರು
ಧರೆಯೊಳು ಸುಖಜೀವನವಹುದು. ೩

---

## ಬಾಡಿ ಬಿದ್ದ ಹೂ.

ಹಿಂದೆ ಗಿಡದ ತುದಿಯನೇರಿ
ಗಂಧವನ್ನು ಧರೆಗೆ ಬೀರಿ
ಉಗುವ ನಗೆಯ ಚೆಲುವ ತೋರಿ
ಮಿಗುವ ತೋಷ ಪಡೆದೆನು.
ಎನ್ನೊಳಾಗ ಪ್ರೇಮವಿರಿಸಿ
ಎನ್ನ ನೆಲೆಯ ಠಾವನರಸಿ
ತುಂಬಿ ಹರಿವ ಮಧುವ ಹೀರಿ
ತುಂಬಿ ತೋಷಗೊಂಡಿತು. ೧

ಇಂದು ವದನೆ ಬಂದು ನೋಡಿ
ಗಂಧವನ್ನು ಮೂಸಿ ನೋಡಿ
ನಂದದಿಂದ ಕೂಡಿ ಪಾಡಿ
ನರಿ– ಅಂದಿನಂದಕೊಲಿದಳು.
ಬಾಡಿ ನೆಲಕೆ ಬಿದ್ದೆನೀಗ
ನೋಡಲೆನ್ನ ಬಾರರೀಗ
ಗಂಧವಿಲ್ಲ ಚಂದವಿಲ್ಲ
ಕೋ ವೆಂದು ಆಗಲಿ ಪೋದರು.

ಇಂದು ನಾನು ಮರುಗುವಾಗ
ನೊಂದು ನೊಂದು ಕೊರಗುವಾಗ
ಬಂದು ನಿಂದು ನೋಳ್ಪರಿಲ್ಲ
ನರಿ– ಬಂದ ದುಗುಡ ಕೇಳ್ವರೆ!
ಅರಿತೆನೀಗ ಗಂಧವೊಂದೆ
ಧರೆಯು ಮಾನ ಪಡೆವುದೆಂದೆ
ಗಂಧವಿಲ್ಲದಿರಲು ಮುಂದೆ
ಕುಂದಿ ಬಾಳು ವ್ಯರ್ಥವು.

